# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಸದಸ್ಯರ ಹೆಸರು | ಶ್ರೀ. ಸಿ.ಎನ್. ಮಂಜೇಗೌಡ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ). |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | 42 (244) |
| ಉತ್ತರಿಸಬೇಕಾದ ದಿನಾಂಕ | 17.02.2022 |
| ಉತ್ತರಿಸಬೇಕಾದವರು | ನಗರಾಭಿವೃದ್ಧಿ ಸಚಿವರು |

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ) | ಲಕ್ಷ್ಮಣತೀರ್ಥ ನದಿಯು ಕಲುಷಿತಗೊಂಡು ಉದ್ಯಾನದೊಳಗಿನಿಂದ ಹರಿದು ಬರುವ ಜೀವ ನದಿಗೆ ಹುಣಸೂರು ನಗರದ 14 ಕಡೆಗಳಿಂದ ಕಲ್ಮಶಯುಕ್ತ ನೀರು ಸೇರಿಕೊಂಡು ಮಲಿನಗೊಂಡು ನೀಲಿ ಬಣ್ಣಕ್ಕೆ ತಿರುಗುತ್ತಾ ಇಡೀ ಹುಣಸೂರು ನಗರಕ್ಕೆ ದುರ್ವಾಸನೆ ಬರುತ್ತಿದ್ದು, ನಗರದ ಪರಿಸರವನ್ನು ಹಾಳು ಮಾಡುತ್ತಿರುವು ಸರ್ಕಾರದ ಗಮನಕ್ಕೆ ಬಂದಿದೆಯೇ; | ಹೌದು. |
| ಆ) | ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ತೆಗೆದುಕೊಂಡಿರುವ ಕ್ರಮಗಳೇನು: (ವಿವರ ನೀಡುವುದು) | ಹುಣಸೂರು ನಗರದಲ್ಲಿ ಮುಖ್ಯವಾಗಿ ಎರಡು ಸ್ಥಳಗಳಾದ ದಾವಣಿ ಬೀದಿ ಮತ್ತು ಶಬ್ಬೀರ್ ನಗರದ ಹತ್ತಿರ ತೆರೆದ ಚರಂಡಿಗಳಲ್ಲಿ ತ್ಯಾಜ್ಯ ನೀರು ಲಕ್ಷ್ಮಣತೀರ್ಥ ನದಿಗೆ ಸೇರಿ ಕಲುಷಿತವಾಗುತ್ತಿರುವುದನ್ನು ತಡೆಗಟ್ಟಲು ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ ಮಾನದಂಡದಂತೆ ರೂ.26.80 ಕೋಟಿಗಳ ಯೋಜನೆಗೆ ದಿನಾಂಕ:25-03-2021 ರಲ್ಲಿ ಸರ್ಕಾರದ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಸದರಿ ಯೋಜನಾ ಕಾಮಗಾರಿಯನ್ನು ದಿನಾಂಕ: 30-12-2021 ರಲ್ಲಿ ಗುತ್ತಿಗೆದಾರರಿಗೆ ವಹಿಸಲಾಗಿದ್ದು, ಸರ್ವೆ ಕೆಲಸವು ಪ್ರಗತಿಯಲ್ಲಿ ಇರುತ್ತದೆ. |
| ಇ) | ಲಕ್ಷ್ಮಣತೀರ್ಥ ನದಿಯನ್ನು ಪುನಶ್ಚೇತನಗೊಳಿಸುವಲ್ಲಿ ಸೇವ್ ಅವರ್ ಅರ್ಥ್ ಕ್ಲಬ್ ಪರಿಸರವಾದಿಗಳು, ಸಂಘ ಸಂಸ್ಥೆಗಳು, ಕಾಲೇಜು-ವಿದ್ಯಾರ್ಥಿಗಳು, ಸಾರ್ವಜನಿಕರು ಹೋರಾಟ ನಡೆಸಿದರೂ ಸಹ ಸರ್ಕಾರ ಇವರ ಮನವಿಯನ್ನು ಪರಿಗಣಿಸದೆ ಮೌನ ವಹಿಸಿರುವುದು ನಿಜವೇ (ವಿವರ ನೀಡುವುದು) | |
| ಈ) | ಹುಣಸೂರು ನಗರದ ಜನ ಸಂಖ್ಯೆ ಸುಮಾರು 60 ಸಾವಿರವಿದ್ದು, ಹುಣಸೂರಿನಲ್ಲಿ ಉತ್ಪಾದನೆಯಾಗುವ 8 ಎಂ.ಎಲ್.ಡಿ. ಚರಂಡಿ ನೀರಿನ ಪೈಕಿ ಶೇಕಡಾ 40 | ಪ್ರಸ್ತುತ ಹುಣಸೂರು ನಗರದಲ್ಲಿ ಹಾಲಿ ಇರುವ ಒಳಚರಂಡಿ ಕೊಳವೆ ಮಾರ್ಗ ಮತ್ತು 3.9 ಎಂ.ಎಲ್.ಡಿ ಸಾಮರ್ಥ್ಯದ Oxidation Pond ಮಾದರಿಯ ತ್ಯಾಜ್ಯ ನೀರು ಸಂಸ್ಕರಣಾ ಘಟಕದಲ್ಲಿ ತ್ಯಾಜ್ಯ ನೀರು ಸಂಸ್ಕರಣೆಗೊಳ್ಳುತ್ತಿದ್ದು ಯೋಜನೆಯನ್ನು 2000 |

| | | |
|---|---|---|
| | ರಷ್ಟು ಮಾತ್ರ ಸಂಸ್ಕರಣೆಯಾಗಿ ಇನ್ನುಳಿದ ನೀರು ಕಲುಷಿತವಾಗಿ ಲಕ್ಷ್ಮಣತೀರ್ಥ ನದಿಯು ಕೊಳಚೆ ಚರಂಡಿಯಂತಾಗಿ ವಿಷಪೂರಿತವಾಗಿ ನಾಲ್ಕು ದಶಕಗಳು ಕಳೆದರೂ ಸಹ ಯಾವ ಸರ್ಕಾರವು ಇತ್ತ ಕಡೆ ಗಮನಹರಿಸದಿರುವುದಕ್ಕೆ ಕಾರಣಗಳೇನು; (ವಿವರ ನೀಡುವುದು) | ಇಸವಿಯಲ್ಲಿ ಪೂರ್ಣಗೊಳಿಸಿದ್ದು, ಹುಣಸೂರು ನಗರ ಸಭೆ ವತಿಯಿಂದ ನಿರ್ವಹಣೆ ಮಾಡಲಾಗುತ್ತಿದೆ.<br><br>ಮಂಡಳಿ ವತಿಯಿಂದ 2036 ನೇ ಇಸವಿಗೆ ಅಂದಾಜಿಸಿದ 77000 ಜನ ಸಂಖ್ಯೆಗೆ ಅನುಗುಣವಾಗಿ ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ ಮಾನದಂಡದಂತೆ ಈಗಾಗಲೇ ಅನುಮೋದನೆಗೊಂಡಿರುವ ರೂ.2680.00 ಲಕ್ಷಗಳ ಯೋಜನೆಯಡಿ 8.0 ಎಂ.ಎಲ್.ಡಿ ಸಾಮರ್ಥ್ಯದ ಎಸ್.ಬಿ.ಆರ್ ತಾಂತ್ರಿಕತೆಯ ತ್ಯಾಜ್ಯ ಸಂಸ್ಕರಣಾ<br><br>ಘಟಕವನ್ನು ನಿರ್ಮಿಸುವ ಕಾಮಗಾರಿಯನ್ನು ಕೈಗೊಳ್ಳಲು ಗುತ್ತಿಗೆದಾರರನ್ನು ನೇಮಿಸಲಾಗಿದ್ದು, ಕಾಮಗಾರಿಯನ್ನು ಶೀಘ್ರವಾಗಿ ಪ್ರಾರಂಭಿಸಿ ನಗರದ ತ್ಯಾಜ್ಯ ನೀರನ್ನು ಸಂಸ್ಕರಿಸಲು ಕ್ರಮ ಕೈಗೊಳ್ಳಲಾಗಿದೆ. |
| ಉ) | ಹುಣಸೂರು ನಗರದಲ್ಲಿ ಕಾಲರ ಇನ್ನಿತರೆ ಮಾರಕ ರೋಗಾಣುಗಳಿಂದ ಹುಣಸೂರು ನಾಗರೀಕರಿಗೆ ಆರೋಗ್ಯದ ಮೇಲೆ ಪರಿಣಾಮ ಬೀರುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಹಮ್ಮಿಕೊಂಡಿರುವ ಯೋಜನೆಗಳೇನು; (ವಿವರ ನೀಡುವುದು) | ನಾಗರೀಕರ ಆರೋಗ್ಯದ ಮೇಲೆ ದುಷ್ಪರಿಣಾಮ ಬೀರದಂತೆ ವ್ಯವಸ್ಥೆ ಕಲ್ಪಿಸಲು ಹುಣಸೂರು ನಗರದ 2036 ನೇ ಇಸವಿಗೆ ಅಂದಾಜಿಸಿದ 77000 ಜನ ಸಂಖ್ಯೆಗೆ ಅನುಗುಣವಾಗಿ ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ ಮಾನದಂಡದAತೆ ರೂ.2680.00 ಲಕ್ಷಗಳ ಅಂದಾಜಿನ ಯೋಜನೆಯಡಿ 8.0 ಎಂ.ಎಲ್.ಡಿ ಎಸ್.ಬಿ.ಆರ್ ತಾಂತ್ರಿಕತೆಯ ತ್ಯಾಜ್ಯ ಸಂಸ್ಕರಣಾ ಘಟಕವನ್ನು ನಿರ್ಮಿಸುವ ಅಂದಾಜು ಪಟ್ಟಿಯು ಈಗಾಗಲೇ ಅನುಮೋದನೆಗೊಂಡಿದ್ದು, ಕಾಮಗಾರಿಯನ್ನು ಕೈಗೊಳ್ಳಲು ಗುತ್ತಿಗೆದಾರರನ್ನು ನೇಮಿಸಲಾಗಿದ್ದು, ಕಾಮಗಾರಿಯನ್ನು ಶೀಘ್ರವಾಗಿ ಪ್ರಾರಂಭಿಸಿ ಒಂದು ವರ್ಷದಲ್ಲಿ ನಗರದ ತ್ಯಾಜ್ಯ ನೀರನ್ನು ಸಂಸ್ಕರಿಸಲು ಕ್ರಮವಹಿಸಲಾಗಿರುತ್ತದೆ. |
| ಊ) | ಈ ಲಕ್ಷಣತೀರ್ಥ ನದಿ ಕಲುಷಿತವಾಗಿರುವುದನ್ನು ಪುನಶ್ಚೇತನಗೊಳಿಸಲು ಸರ್ಕಾರ ತೆಗೆದುಕೊಳ್ಳುವ ನಿಲುವೇನು? (ವಿವರವಾದ ಮಾಹಿತಿ ನೀಡುವುದು) | ಈಗಾಗಲೇ ಮಾನ್ಯ ರಾಷ್ಟ್ರೀಯ ಹಸಿರು ನ್ಯಾಯಾಧೀಕರಣ ಮಾನದಂಡದಂತೆ ರೂ.2680.00 ಲಕ್ಷಗಳಿಗೆ ಅನುಮೋದನೆಯಾಗಿರುವ ಯೋಜನೆಯಡಿ ಲಕ್ಷ್ಮಣ ತೀರ್ಥ ನದಿಗೆ ಹುಣಸೂರು ನಗರ ವ್ಯಾಪ್ತಿಯಲ್ಲಿ ದಾವಣಿ ಬೀದಿ ಹಾಗೂ ಶಬ್ಬೀರ್ ನಗರ ಹತ್ತಿದ ಸೇರುತ್ತಿರುವ ತ್ಯಾಜ್ಯ ನೀರನ್ನು ತಡೆದು ಮಾರ್ಗಾಂತರ ಮಾಡಿ, 8.00 ಎಂ.ಎಲ್.ಡಿ ಸಾಮರ್ಥ್ಯದ ಎಸ್.ಬಿ.ಆರ್ ತಾಂತ್ರಿಕತೆಯ ತ್ಯಾಜ್ಯ ಸಂಸ್ಕರಣಾ ಘಟಕವನ್ನು ನಿರ್ಮಿಸಲು ಅನುವು ಮಾಡಲಾಗಿದ್ದು, ಶೀಘ್ರವಾಗಿ ಕಾಮಗಾರಿಯನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಿ, ನಗರದ ತ್ಯಾಜ್ಯ ನೀರನ್ನು ಸಂಸ್ಕರಿಸಲು ಕ್ರಮಕೈಗೊಳ್ಳಲಾಗಿದೆ. |

ಸಂಖ್ಯೆ : ನಅಇ 27 ಯುಎಂಎಸ್ 2022

(ಬಿ.ಎ.ಬಸವರಾಜ)
ನಗರಾಭಿವೃದ್ಧಿ ಸಚಿವರು

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು